ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಗುರುವಾರ, ದಿನಾಂಕ : 24 ನೇ ಸೆಪ್ಟೆಂಬರ್, 2020

ಬೆಂಗಳೂರು ನಗರ ಹಾಗೂ ಇನ್ನಿತರೆಡೆ ನಡೆಯುವ ಗಲಭೆ ನಿಯಂತ್ರಿಸುವ ಬಗ್ಗೆ

ಶ್ರೀ ಎಸ್. ಎಲ್. ಭೋಜೇಗೌಡ(ಶಿಕ್ಷಕರ ಕ್ಷೇತ್ರ) –

582 (507) ಮಾನ್ಯ ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಬೆಂಗಳೂರು ನಗರ ಸೇರಿದಂತೆ ಹಲವಾರು ಕಡೆ ಪೊಲೀಸ್ ಠಾಣೆಗಳ ಮೇಲೆ ಹಾಗೂ ಸಾರ್ವಜನಿಕ ಆಸ್ತಿಗಳ ಮೇಲೆ ದಾಳಿಯಾಗಿ ನಷ್ಟ ಸಂಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಹಾಗಿದ್ದಲ್ಲಿ, ಇದನ್ನು ಕಡಿವಾಣ ಹಾಕಲು ಸರ್ಕಾರದ ದಿಟ್ಟ ಕ್ರಮಗಳೇನು; ಸಾರ್ವಜನಿಕರು ತಮ್ಮ ಆಸ್ತಿಯ ನಷ್ಟ ಪರಿಹಾರಕ್ಕೆ ಕಛೇರಿಯಿಂದ ಮತ್ತೊಂದು ಕಛೇರಿಗೆ ಅಲೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ಇಂತಹ ದಾಳಿ ಬಗ್ಗೆ ಸರ್ಕಾರವು ಚುರುಕುತನದಿಂದ ಕೆಲಸ ಮಾಡಲು ಸರ್ಕಾರದ ಹಂತದಲ್ಲಿ ಏನಾದರೂ ಸಮಸ್ಯೆಗಳಿವೆಯೇ; ಸರ್ಕಾರ ಇದನ್ನು ತಡೆಗಟ್ಟುವಲ್ಲಿ ವಿಫಲವಾಗಿದ್ದು, ಈ ಬಗ್ಗೆ ಸರ್ಕಾರದ ಮುಂದಿನ ನಿಲುವುಗಳೇನು;

(ಈ) ರಾಜ್ಯದಲ್ಲಿ ಇತ್ತೀಚೆಗೆ ಅಪರಾಧ ಚಟುವಟಿಕೆಗಳು ಹೆಚ್ಚಾಗಿದ್ದು, ಎಲ್ಲೆಂದರಲ್ಲಿ ಕಳ್ಳತನ, ಕೊಲೆ, ಹಲ್ಲೆಗಳು ಎಗ್ಗಿಲ್ಲದೆ ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಉ) ಇದರ ಬಗ್ಗೆ ಗುಪ್ತಚರ ಇಲಾಖೆಗೆ ಮಾಹಿತಿ ಇಲ್ಲವೇ ಅಥವಾ ಗೊತ್ತಿದ್ದು ಕಣ್ಣುಮುಚ್ಚಿ ಕುಳಿತುಕೊಂಡಿದೆಯೇ;

(ಊ) ಹಾಗಿದ್ದಲ್ಲಿ, ಜನರು ನಿರ್ಭಯವಾಗಿ ಓಡಾಡುವುದು ಯಾವಾಗ; ಸರ್ಕಾರವು ಈ ಬಗ್ಗೆ ಕೈಗೊಳ್ಳಲಿರುವ ಕಠಿಣ ಕ್ರಮಗಳೇನು;

(ಋ) ಪೊಲೀಸ್ ಬೀಟ್ ಅನ್ನು ಸರ್ಕಾರವು ಹೆಚ್ಚಿಸಿಲ್ಲವೆ; ಹೆಚ್ಚಿಸಿದ್ದಲ್ಲಿ, ಅಪರಾಧ ಚಟುವಟಿಕೆಗಳು ಹಗಲಿರುಳು ನಡೆಯುತ್ತಿರುವುದಕ್ಕೆ ಕಾರಣಗಳೇನು?